ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಬುಧವಾರ, ದಿನಾಂಕ : 18 ನೇ ಮಾರ್ಚ್, 2020

ಕ್ರೈಸ್ ಸಂಸ್ಥೆಯಲ್ಲಿರುವ ವಸತಿ ಶಾಲೆಗಳ ಸಿಬ್ಬಂದಿಗಳ ಕುರಿತು

ಶ್ರೀ ಎಸ್. ವ್ಹಿ. ಸಂಕನೂರ್ವ (ಪದವೀಧರರ ಕ್ಷೇತ್ರ) ಮತ್ತು ಶ್ರೀ ನಿರಾಣಿ ಹಣಮಂತ್ ರುದ್ರಪ್ಪ (ಪದವೀಧರರ ಕ್ಷೇತ್ರ) :-

1175(1374+1375) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ (ಕ್ರೈಸ್) ವತಿಯಿಂದ ನಡೆಯುತ್ತಿರುವ ವಸತಿ ಶಾಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ಸಮಸ್ಯೆಗಳು ಸರ್ಕಾರದ ಗಮನಕ್ಕೆ ಬಂದಿವೆಯೇ ;

(ಆ) ಕುಮಾರ್ನಾಯಕ್ ವರದಿ ಪ್ರಕಾರ ಹೆಚ್ಚುವರಿಯಾಗಿ ಒಂದು ವಾರ್ಷಿಕ ವೇತನ ಬಡ್ತಿ ಸೌಲಭ್ಯ ನೀಡಲಾಗಿದೆಯೇ; ಸದರಿ ವರದಿಯಂತೆ ನೌಕರರುಗಳಿಗೆ ಸೌಲಭ್ಯಗಳನ್ನು ಕಲ್ಪಿಸುವಲ್ಲಿ ಸರ್ಕಾರ ವಿಳಂಬ ನೀತಿ ಅನುಸರಿಸುತ್ತಿರುವುದಕ್ಕೆ ಕಾರಣಗಳೇನು ; ಕ್ರೈಸ್ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳಿಗೆ ಕೆ.ಜಿ.ಐ.ಡಿ. ಸೌಲಭ್ಯ ನೀಡುವ ಕುರಿತು ಸರ್ಕಾರ ಚಿಂತನೆ ನಡೆಸಿದೆಯೇ;

(ಇ) ಕ್ರೈಸ್ ಅಧೀನದಲ್ಲಿ ನಡೆಯುತ್ತಿದ್ದು ಅಲ್ಪಸಂಖ್ಯಾತ ವಸತಿ ಶಾಲೆಗಳನ್ನು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಲ್ಲಿ ವಿಲೀನಗೊಳಿಸಿದಂತೆ ಬಿ.ಸಿ.ಎಂ. ಮೊರಾರ್ಜಿ / ರಾಣಿಚೆನ್ನಮ್ಮ ವಸತಿ ಶಾಲೆಗಳನ್ನು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಗೆ ವಿಲೀನಗೊಳಿಸಿ, ಸದರಿ ನೌಕರರುಗಳಿಗೆ ಸೌಲಭ್ಯಗಳನ್ನು ಒದಗಿಸಲು ಸರ್ಕಾರ ವಿಳಂಬ ಮಾಡುತ್ತಿರುವುದಕ್ಕೆ ಕಾರಣಗಳೇನು ;

(ಈ) ಸದರಿ ಶಾಲೆಗಳನ್ನು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ವಿಲೀನಗೊಳಿಸಿ, ಇತರೆ ಇಲಾಖೆಯ ಸರ್ಕಾರಿ ನೌಕರರಿಗೆ ಮತ್ತು ಶಿಕ್ಷಕರಿಗೆ ಇರುವ ಸೌಲಭ್ಯಗಳಂತೆ ಸದರಿ ನೌಕರರುಗಳಿಗೆ

ಸೌಲಭ್ಯಗಳನ್ನು ಕಲ್ಪಿಸಲು ಇನ್ನಾದರೂ ಸರ್ಕಾರ ಮುಂದಾಗುವುದೇ ಮತ್ತು ಯಾವ ಕಾಲಮಿತಿಯಲ್ಲಿ ಸದರಿ ಪ್ರಕ್ರಿಯೆಯನ್ನು ಪೂರ್ಣಗೊಳಿಸಲಾಗುವುದು ?